## ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 863 (964)
2) ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3) ಉತ್ತರಿಸುವ ದಿನಾಂಕ : 28.09.2020
4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಅರಣ್ಯ ಪ್ರದೇಶದ ಅಂಚಿನಲ್ಲಿರುವ ರೈತರು/ಖಾಸಗಿಯವರು ಅಲ್ಲಿ ಬೆಳೆಗಳನ್ನು ಬೆಳೆಯಲು ಸಾಧ್ಯವಾಗದೆ ತಮ್ಮ ಜಮೀನುಗಳನ್ನು ಅರಣ್ಯ ಇಲಾಖೆಗೆ ಮಾರಾಟ ಮಾಡಲು ತಯಾರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಇಂತಹ ಖಾಸಗಿಯವರಿಂದ ಜಮೀನುಗಳನ್ನು ಕೊಳ್ಳಲು ಸರ್ಕಾರದ ಕ್ರಮಗಳೇನು; (ವಿವರ ನೀಡುವುದು) | ಹೌದು.<br>ಆದೇಶ ಸಂಖ್ಯೆ: ಅಪಜೀ 139 ಎಫ್ಎಫ್ 2012 ದಿನಾಂಕ: 22.02.2014 ರಲ್ಲಿ ಕಾಯ್ದಿಟ್ಟ ಅರಣ್ಯ ಮತ್ತು ರಕ್ಷಿತ ಅರಣ್ಯಗಳ ಮಧ್ಯಭಾಗದಲ್ಲಿ ಮತ್ತು ಅರಣ್ಯದಂಚಿನಲ್ಲಿರುವ ಖಾಸಗಿ ಪ್ರದೇಶವನ್ನು ಸ್ವಾಧೀನಪಡಿಸಿಕೊಳ್ಳುವ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದ್ದು, ಸದರಿ ಸಮಿತಿಯು ಅನುಸರಿಸಬೇಕಾದ ವಿಧಿವಿಧಾನಗಳು ಮತ್ತು ಮಾರ್ಗಸೂಚಿಗಳನ್ನು ವಿವರಿಸಲಾಗಿರುತ್ತದೆ.<br>**(ಅನುಬಂಧ – 1 ರಲ್ಲಿ ಒದಗಿಸಲಾಗಿದೆ)** |
| ಆ) | ಕಳೆದ ಮೂರು ವರ್ಷಗಳಲ್ಲಿ ಇಂತಹ ಭೂಮಿಗಳನ್ನು ಕೊಂಡುಕೊಂಡಿದ್ದಲ್ಲಿ ಅದರ ವಿಸ್ತೀರ್ಣ, ಎಕರೆಗೆ ನೀಡಲಾದ ದರಗಳ ಬಗೆಗಿನ (ಮಾಹಿತಿ ನೀಡುವುದು) | ಅಂತಹ ಪ್ರಕರಣಗಳು ಯಾವುದೂ ಇರುವುದಿಲ್ಲ. |
| ಇ) | ಕೊಡಗು ಜಿಲ್ಲೆಯಲ್ಲಿ ಇಂತಹ ಪ್ರಕರಣಗಳು ಯಾವುದಾದರೂ ಇವೆಯೇ; ಇದ್ದಲ್ಲಿ ಈ ಪ್ರಕರಣಗಳಲ್ಲಿ ಇಲ್ಲಿಯವರೆಗೆ ಆಗಿರುವ ಪ್ರಗತಿ ಏನು; (ಪೂರ್ಣ ವಿವರಗಳನ್ನು ನೀಡುವುದು) | ಕೊಡಗು ಜಿಲ್ಲೆಯಲ್ಲಿ ಇಂತಹ 10 ಪ್ರಕರಣಗಳು ಇವೆ. ಸದರಿ ಪ್ರಕರಣಗಳಲ್ಲಿ ಇಲ್ಲಿಯವರೆಗೆ ಆಗಿರುವ ಪ್ರಗತಿಯ ವರದಿಯ ತ:ಖ್ತೆಯನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |
| ಈ) | ಇಂತಹ ಪ್ರಕರಣಗಳಿಗೆ ಸರ್ಕಾರವು ಕಳೆದ ಮೂರು ವರ್ಷಗಳಲ್ಲಿ ನೀಡಲಾಗಿರುವ ಅನುದಾನವೆಷ್ಟು? (ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ರೈತರು/ಖಾಸಗಿಯವರಿಂದ ಯಾವುದೇ ಭೂಮಿಗಳನ್ನು ಕೊಂಡುಕೊಂಡಿರುವುದಿಲ್ಲ. |

ಸಂಖ್ಯೆ: ಅಪಜೀ 53 ಎಫ್‌ಟಿಎಸ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಶ್ರೀ ಕೆ.ಸಿ. ಕಾರ್ಯಪ್ಪ, ಏರ್ ಮಾರ್ಷಲ್ (ನಿವೃತ್ತ) ಇವರು ಸರ್ವೋಚ್ಛ ನ್ಯಾಯಾಲಯದಲ್ಲಿ ದಾಖಲಿಸಿರುವ I.A. No. 2530-2531ರ ಸಂಬಂಧ ಪ್ರಾಕೃತಿಕ ಕಾಯ್ದಿಟ್ಟ ಅರಣ್ಯ ಮತ್ತು ರಕ್ಷಿತ ಅರಣ್ಯಗಳ ಮಧ್ಯ ಭಾಗದಲ್ಲಿ ಮತ್ತು ಅಕ್ಕ-ಪಕ್ಕದಲ್ಲಿರುವ ಖಾಸಗಿ ಪ್ರದೇಶವನ್ನು ಸರ್ಕಾರಕ್ಕೆ ಸ್ವಾಧೀನ ಪಡಿಸಿಕೊಳ್ಳುವ ಬಗ್ಗೆ ಕೇಂದ್ರೀಯ ಅಧಿಕಾರಸ್ಥ ಸಮಿತಿಯು (CEC) ಮಾಡಿರುವ ಶಿಫಾರಸ್ಸು ಕುರಿತು.

ಓದಲಾಗಿದೆ:

1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 139 ಎಫ್‌ಎಎಫ್ 2012, ದಿನಾಂಕ: 08-08-2012.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು) ರವರ ಅಧಿಕೃತ ಜ್ಞಾಪನ ಸಂಖ್ಯೆ: ಎ(5):ಸಿಸಿಎಫ್:ಎಲ್‌ಆರ್:ಸಿಆರ್: 224/2012-13, ದಿನಾಂಕ: 16-10-2012.
3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ: 19-11-2013 ರಂದು ನಡೆದ ಸಭಾನಡವಳಿಗಳು.
4. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 139 ಎಫ್‌ಎಎಫ್ 2012, ದಿನಾಂಕ: 06.01.2014.
5. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 06.01.2014 ರಂದು ನಡೆದ ಸಭಾನಡವಳಿಗಳು.

*****

**ಪ್ರಸ್ತಾವನೆ:-**

1. ಶ್ರೀ ಕೆ.ಸಿ. ಕಾರ್ಯಪ್ಪ, ಏರ್ ಮಾರ್ಷಲ್ (ನಿವೃತ್ತ) ಇವರು ಸರ್ವೋಚ್ಛ ನ್ಯಾಯಾಲಯದಲ್ಲಿ ದಾಖಲಿಸಿರುವ I.A. No. 2530-2531ರ ಸಂಬಂಧ ಕೇಂದ್ರೀಯ ಅಧಿಕಾರಸ್ಥ ಸಮಿತಿಯು (CEC) ಪ್ರಾಕೃತಿಕ ಕಾಯ್ದಿಟ್ಟ ಅರಣ್ಯ ಮತ್ತು ರಕ್ಷಿತ ಅರಣ್ಯಗಳ ಮಧ್ಯ ಭಾಗದಲ್ಲಿ ಮತ್ತು ಅಕ್ಕ-ಪಕ್ಕದಲ್ಲಿರುವ ಖಾಸಗಿ ಪ್ರದೇಶವನ್ನು ಸರ್ಕಾರಕ್ಕೆ ಸ್ವಾಧೀನ ಪಡಿಸಿಕೊಳ್ಳುವ ಬಗ್ಗೆ ನೀಡಲಾದ ಶಿಫಾರಸ್ಸಿನಂತೆ ಉಲ್ಲೇಖ (1) ರಲ್ಲಿ ಓದಲಾದ ದಿನಾಂಕ: 08-08-2012ರ ಆದೇಶದಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರವರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯನ್ನು ನೇಮಕ ಮಾಡಲಾಗಿದೆ.

2. ಈ ತಜ್ಞರ ಸಮಿತಿಯು ದಿನಾಂಕ: 05-10-2012 ರಂದು ಸಭೆ ಸೇರಿ ಸುದೀರ್ಘವಾಗಿ ಚರ್ಚಿಸಿ ಪ್ರಥಮವಾಗಿ ರಾಜ್ಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ಕಮಿಟಿಗಳನ್ನು ನೇಮಿಸಿ ಈ ಬಗ್ಗೆ ವಿವರವಾದ ವರದಿಯನ್ನು ಸಲ್ಲಿಸುವಂತೆ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಭೂದಾಖಲೆ) ಹಾಗೂ ಸದಸ್ಯ ಕಾರ್ಯದರ್ಶಿ ಇವರಿಗೆ ಸೂಚಿಸಿತು. ಅದರಂತೆ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು) ರವರು ಉಲ್ಲೇಖ (2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ರಾಜ್ಯಮಟ್ಟದ ಉಪ ಸಮಿತಿ ಹಾಗೂ ವೃತ್ತ ಮಟ್ಟದ ಉಪ ಸಮಿತಿಗಳನ್ನು ರಚಿಸಿರುತ್ತಾರೆ. ವೃತ್ತ ಮಟ್ಟ ಸಮಿತಿಗಳು ಈ ಬಗ್ಗೆ ವಿವರಗಳನ್ನು ಸಂಗ್ರಹಿಸಿ, ಸಭೆಗಳನ್ನು ನಡೆಸಿ, ಸ್ವಾಧೀನ ಪಡಿಸಿಕೊಳ್ಳಲು ಈವರೆಗೆ 10 ಅರಣ್ಯ ವೃತ್ತಗಳಿಂದ 48683 ಎಕರೆ ಖಾಸಗಿ ಪ್ರದೇಶಗಳನ್ನು ಸ್ವಾಧೀನ ಪಡಿಸಿಕೊಳ್ಳಲು ಗುರುತಿಸಿರುತ್ತಾರೆ.

3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ರಚಿಸಲಾದ ತಜ್ಞರ ಸಮಿತಿಯು ಮೇಲೆ ಉಲ್ಲೇಖ (3)ರಲ್ಲಿ ಓದಲಾದ ದಿನಾಂಕ: 19-11-2013 ರಂದು ಸಭೆ ಸೇರಿ 1,34,217 ಹೆಕ್ಟರ್ ಅರಣ್ಯ ಪ್ರದೇಶವನ್ನು ಪ್ರಾಕೃತಿಕ ಅರಣ್ಯ ಇರುವ ಖಾಸಗಿ ಪ್ರದೇಶವೆಂದು ಗುರುತಿಸಿರುವುದನ್ನು "Private Forest Lands which are not with the Forest Department" ಎಂದು ಗಮನಿಸಲಾಯಿತು ಮತ್ತು ಖಾಸಗಿ ಅರಣ್ಯ ಪ್ರದೇಶಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಬಗ್ಗೆ ಯಾವುದೇ ತೀರ್ಮಾನ ತೆಗೆದುಕೊಳ್ಳಲು ಕೇವಲ ಒಟ್ಟಾರೆ ಮಾಹಿತಿ ಸಾಕಾಗುವುದಿಲ್ಲ. ಈ ಬಗ್ಗೆ ಪ್ರತೀ ಖಾಸಗಿ ಅರಣ್ಯ ಜಮೀನುಗಳ ಬಗ್ಗೆ ಪೂರ್ಣ ಮಾಹಿತಿ ಮತ್ತು ದಾಖಲಾತಿಗಳ ಅವಶ್ಯವಿದ್ದು, ಈ ಕೆಳಕಂಡ ವಿವರಗಳನ್ನೊಳಗೊಂಡ ದಾಖಲೆಗಳನ್ನು ಪರಿಶೀಲಿಸಿ ಒದಗಿಸಲು ತೀರ್ಮಾನಿಸಲಾಯಿತು.

(i) ಖಾಸಗಿ ಅರಣ್ಯ ಪ್ರದೇಶದ ಒಡೆತನ ಹೊಂದಿರುವವರ ಹೆಸರು, ವಿಳಾಸ, ಕುಟುಂಬದ ಸದಸ್ಯರ ಸಂಖ್ಯೆ, ಸದರಿ ಖಾಸಗಿ ಜಮೀನಿನಲ್ಲಿ ವಾಸಿಸುತ್ತಿರುವ ಖಾಸಗಿ ಅರಣ್ಯ ಪ್ರದೇಶದ ವಿಸ್ತೀರ್ಣ, ದಟ್ಟಣೆ (density) ಸದರಿ ಪ್ರದೇಶಕ್ಕೆ ಇರುವ ಸಂಪರ್ಕ, ಇನ್ನಿತರೆ ವಿವರಗಳು.

(ii) ಈ ಖಾಸಗಿ ಅರಣ್ಯದ ಭೂ ದಾಖಲಾತಿಗಳಾದ ಆರ್.ಟಿ.ಸಿ. ಪಹಣಿ, ಖಾತೆ, ಮ್ಯುಟೇಶನ್, ನಕ್ಷೆ, ಸರ್ವೆ ದಾಖಲಾತಿಗಳು, ಇನ್ನಿತರೆ ದಾಖಲಾತಿಗಳು ಒಳಗೊಂಡಂತೆ ಸುತ್ತಲು ಇರುವ ಅರಣ್ಯ ಪ್ರದೇಶದ ನೋಟಿಫಿಕೇಷನ್ ಸಹ ಒದಗಿಸುವುದು.

(iii) ಈ ಖಾಸಗಿ ಅರಣ್ಯವನ್ನು ಸ್ವಾಧೀನ ಪಡಿಸಿಕೊಳ್ಳಲೇ ಬೇಕಾದ ಕಾರಣಗಳನ್ನು ನೀಡುವುದು.

(iv) ಭೂ ಮಾಪನಾ ಇಲಾಖೆಯವರು ಸ್ವಾಧೀನ ಪಡಿಸಿಕೊಳ್ಳಬೇಕಾದ ಪ್ರದೇಶಗಳ ಬಗ್ಗೆ ನಿಖರವಾದ ಮಾಹಿತಿ ನೀಡುವುದು. ವಿಶೇಷವಾಗಿ ಮೂಲ ದಾಖಲಾತಿಗಳ ಪ್ರಕಾರದಂತೆ, ಮಂಜೂರಾದ / ಮಾಲಿಕತ್ವ ಹೊಂದಿರುವ ಪ್ರದೇಶವೇ, ಈಗ ಹಾಲಿ ಸ್ವಾಧೀನ ಪಡಿಸಿಕೊಳ್ಳಬೇಕಾದ ಪ್ರದೇಶವಾಗಿರುತ್ತದೆಯೇ? ಅಥವಾ ಇಲ್ಲವೇ ಎಂದು ದೃಢೀಕರಿಸುವುದು. ಈ ಬಗ್ಗೆ ಸರ್ವೆ ಇಲಾಖೆ ಮತ್ತು ಅರಣ್ಯ ಇಲಾಖೆ ಜಂಟಿ ಸರ್ವೆ ಮಾಡಿ ದೃಢೀಕರಿಸುವುದು. ಈ ರೀತಿ ಮೋಜಣಿ ಮಾಡುವಾಗ ಮೂಲ ದಾಖಲಾತಿಗಳ ಪ್ರಕಾರವೇ ಸರ್ವೆ ಮಾಡುವುದು.

4. ಮೇಲೆ ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ: 16-10-2012 ರಂದು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರು ರಚಿಸಿರುವ ಎರಡು ತಜ್ಞರ ಸಮಿತಿಗಳನ್ನು ರದ್ದುಪಡಿಸಿ, ಜಿಲ್ಲಾಮಟ್ಟದಲ್ಲಿ ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಪುನರ್ ರಚಿತ ಸಮಿತಿಯೊಂದನ್ನು ರಚಿಸಲು ತೀರ್ಮಾನಿಸಲಾಯಿತು. ಅದರಂತೆ ಮೇಲೆ ಉಲ್ಲೇಖ (4)ರಲ್ಲಿ ಓದಲಾದ ದಿನಾಂಕ: 06.01.2014ರ ಆದೇಶದಲ್ಲಿ ಪ್ರಾಕೃತಿಕ ಕಾಯ್ದಿಟ್ಟ ಅರಣ್ಯ ಮತ್ತು ರಕ್ಷಿತ ಅರಣ್ಯಗಳ ಮಧ್ಯ ಭಾಗದಲ್ಲಿ ಮತ್ತು ಅಕ್ಕ-ಪಕ್ಕದಲ್ಲಿರುವ ಖಾಸಗಿ ಪ್ರದೇಶವನ್ನು ಸರ್ಕಾರಕ್ಕೆ ಸ್ವಾಧೀನ ಪಡಿಸಿಕೊಳ್ಳುವ ಕುರಿತು ಜಿಲ್ಲಾ ಮಟ್ಟದ ಸಮಿತಿಯನ್ನು ಮತ್ತು ಜಿಲ್ಲಾ ಮಟ್ಟದ ಸಮಿತಿಯ ಕರ್ತವ್ಯಗಳು ಹಾಗೂ ಸಮಿತಿಯು ಪರಿಶೀಲಿಸಬೇಕಾಗಿರುವ ದಾಖಲೆಗಳ ಬಗ್ಗೆ ಆದೇಶ ಹೊರಡಿಸಲಾಗಿತ್ತು.

5. ಮೇಲೆ ಉಲ್ಲೇಖ (5)ರಲ್ಲಿ ಓದಲಾದ ದಿನಾಂಕ: 06.012014ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನದಂತೆ ಖಾಸಗಿ ಅರಣ್ಯ ಪ್ರದೇಶಗಳನ್ನು ಸ್ವಾಧೀನಪಡಿಸಿಕೊಳ್ಳುವ ಜಮೀನುಗಳು ಮತ್ತು ಇತರೆ ಚರ ಮತ್ತು ಸ್ಥಿರಾಸ್ತಿಗಳ ಮೌಲ್ಯಮಾಪನ ಮಾಡಲು. ಸೂಕ್ತ ಪರಿಹಾರ ನಿಗಧಿ ಮಾಡಲು ಅನುಸರಿಸಬೇಕಾದ ವಿಧಿವಿಧಾನಗಳ ಬಗ್ಗೆ ನೀಡಲಾಗಿರುವ ಸೂಚನೆಗಳನ್ನು ಗಮನದಲ್ಲಿಟ್ಟುಕೊಂಡು ಈ ಹಿಂದೆ ಹೊರಡಿಸಲಾಗಿರುವ ಸಂಖ್ಯೆ: ಅಪಜೀ 139 ಎಫ್ಎಎಫ್ 2012, ದಿನಾಂಕ: 06.01.2014ರ ಆದೇಶವನ್ನು ಮಾರ್ಪಡಿಸಿ ಈ ಕೆಳಗಿನಂತೆ ಮಾರ್ಪಡಿಸಿದ ಆದೇಶವನ್ನು ಹೊರಡಿಸಲಾಗಿದೆ.

**<u>ಸರ್ಕಾರದ ಆದೇಶ ಸಂಖ್ಯೆ: ಅಪಜೀ 139 ಎಫ್ಎಎಫ್ 2012,</u>**
**<u>ಬೆಂಗಳೂರು, ದಿನಾಂಕ: 22.02.2014</u>**

1. ಮೇಲೆ ಉಲ್ಲೇಖ (5)ರಲ್ಲಿ ಓದಲಾದ ದಿನಾಂಕ: 06.01.2014 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ತೀರ್ಮಾನದಂತೆ ಸರ್ಕಾರದ ಆದೇಶ ಸಂಖ್ಯೆ: ಅಪಜೀ 139 ಎಫ್ಎಎಫ್ 2012, ದಿನಾಂಕ: 06.01.2014ರ ಆದೇಶವನ್ನು ಮಾರ್ಪಡಿಸಿ, ಖಾಸಗಿ ಅರಣ್ಯ ಪ್ರದೇಶಗಳನ್ನು ಸ್ವಾಧೀನಪಡಿಸಿಕೊಳ್ಳುವ ಜಮೀನುಗಳು ಮತ್ತು ಇತರೆ ಚರ ಮತ್ತು ಸ್ಥಿರಾಸ್ತಿಗಳ ಮೌಲ್ಯಮಾಪನ ಮಾಡಲು ಸೂಕ್ತ ಪರಿಹಾರ ನಿಗಧಿ ಮಾಡಲು ಹಾಗೂ ಈ ಬಗ್ಗೆ ನಿರ್ಧಾರಗಳನ್ನು ಕೈಗೊಳ್ಳಲು ಈ ಕೆಳಕಂಡ ಸದಸ್ಯರನ್ನೊಳಗೊಂಡ ಜಿಲ್ಲಾಮಟ್ಟದ ಸಮಿತಿಯನ್ನು ಸರ್ಕಾರ ರಚಿಸಿದೆ.

| | | | |
|---|---|---|---|
| (1) | ಜಿಲ್ಲಾಧಿಕಾರಿ | - | ಅಧ್ಯಕ್ಷರು |
| (2) | ಉಪ ನಿರ್ದೇಶಕರು (ಭೂ ದಾಖಲೆಗಳು) | - | ಸದಸ್ಯರು |
| (3) | ಜಿಲ್ಲಾ ನೋಂದಣಾಧಿಕಾರಿಗಳು | - | ಸದಸ್ಯರು |
| (4) | ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿ (ಪ್ರಾದೇಶಿಕ/ವನ್ಯಜೀವಿ) | - | ಸದಸ್ಯರು |
| (5) | ಪ್ರಾದೇಶಿಕ ಉಪ ಅರಣ್ಯ ಸಂರಕ್ಷಣಾಧಿಕಾರಿ ಜಿಲ್ಲಾ ಕೇಂದ್ರ ಸ್ಥಾನ | - | ಸದಸ್ಯ ಕಾರ್ಯದರ್ಶಿ |

2. ಅರಣ್ಯ ಇಲಾಖಾ ಸುಪರ್ಧಿನಲ್ಲಿರದ ಖಾಸಗಿ ಪ್ರದೇಶಗಳನ್ನು ಸ್ವಾಧೀನಪಡಿಸಿಕೊಳ್ಳುವ ಬಗ್ಗೆ ವಿವರಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ-1 ರಲ್ಲಿನ ಚೆಕ್‌ಲಿಸ್ಟ್ ನಂತೆ ಪರಿಶೀಲಿಸುವುದು.

3. ಅರಣ್ಯ ಇಲಾಖೆಯ ಸುಪರ್ಧಿನಲ್ಲಿರದ ಖಾಸಗಿ ಪ್ರದೇಶಗಳನ್ನು ಅರಣ್ಯ ಇಲಾಖೆಯು ಸ್ವಾಧೀನ ಪಡಿಸಿಕೊಳ್ಳುವ ಬಗ್ಗೆ ಅನುಸರಿಸಬೇಕಾದ ವಿಧಿವಿಧಾನಗಳು ಹಾಗೂ ಮಾರ್ಗಸೂಚಿಗಳು ನೀಡಿತು.

(i) ಖಾಸಗಿ ಪ್ರದೇಶವನ್ನು ಸ್ವಾಧೀನ ಪಡಿಸಿಕೊಳ್ಳುವ ಅಗತ್ಯತೆ ಬಗ್ಗೆ ಸಂಬಂಧಪಟ್ಟ ಅರಣ್ಯಾಧಿಕಾರಿಗಳು ಮತ್ತು ಜಿಲ್ಲಾ ಸಮಿತಿ ಸೂಕ್ತ ಸಮರ್ಥನೆಯನ್ನು ನೀಡುವುದು.

(ii) ಖಾಸಗಿ ಪ್ರದೇಶಗಳನ್ನು ಸ್ವಾಧೀನ ಪಡಿಸಿಕೊಳ್ಳುವ ಉದ್ದೇಶ. ಸದರಿ ಪ್ರದೇಶಗಳ ಸ್ವರೂಪ, ಸ್ವಾಧೀನ ಪಡಿಸಿಕೊಳ್ಳುವುದರಿಂದ ಅರಣ್ಯ ಮತ್ತು ಅರಣ್ಯ ನಿರ್ವಹಣೆಗೆ ಆಗುವ ಅನುಕೂಲ, ಇನ್ನಿತರೆ ವಿಷಯಗಳ ಬಗ್ಗೆ ಸ್ಪಷ್ಟ ಚಿತ್ರಣವಿರಬೇಕು.

(iii) ಸ್ವಾಧೀನ ಪಡಿಸಿಕೊಳ್ಳಲು ಉದ್ದೇಶಿಸಿರುವ ಖಾಸಗಿ ಪ್ರದೇಶವು ಅರಣ್ಯ ಪ್ರದೇಶದ ಒಳಗಡೆ ಇದ್ದರೂ ಸಹ [illegible] ಅರಣ್ಯ ಪ್ರದೇಶಕ್ಕೆ ಹೊಂದಿಕೊಂಡಂತಿರಬೇಕು ಮತ್ತು ಸದರಿ ಪ್ರದೇಶಕ್ಕೆ ಪ್ರವೇಶಿಸಲು ಬೇರೊಂದು ಖಾಸಗಿ ಜಮೀನಿನಿಂದ ಹೋಗುವ ಪ್ರಮೇಯ ಇರಬಾರದು. ಒಂದು ವೇಳೆ ಹಲವಾರು ಖಾಸಗಿ ಪ್ರದೇಶಗಳಿದ್ದರೆ ಮೊದಲು ಅರಣ್ಯ ಪ್ರದೇಶಕ್ಕೆ ಹೊಂದಿಕೊಂಡ ಪ್ರದೇಶವನ್ನು ಸ್ವಾಧೀನ ಪಡಿಸಿಕೊಳ್ಳಬೇಕು. ತದನಂತರ ಸ್ವಾಧೀನ ಪಡಿಸಿಕೊಂಡ ಪ್ರದೇಶಗಳಿಗೆ

ಹೊಂದಿ ಕೊಂಡಿರುವ ಪ್ರದೇಶವನ್ನು ಒಂದೊಂದಾಗಿ ಸ್ವಾಧೀನ ಪಡಿಸಿಕೊಳ್ಳಲು ಕ್ರಮ ಕೈಗೊಳ್ಳುವುದು. ಅಂದರೆ, ಅರಣ್ಯ ಪ್ರದೇಶಕ್ಕೆ ಹೊಂದಿಕೊಂಡ ಪ್ರದೇಶಗಳನ್ನು ಒಂದೊಂದಾಗಿ ಅಥವಾ ಒಟ್ಟಾಗಿ ಸ್ವಾಧೀನ ಪಡಿಸಿಕೊಳ್ಳಲು ಕ್ರಮ ಕೈಗೊಳ್ಳಬಹುದು. ಆದರೆ, ಅರಣ್ಯ ಎನ್‌ಕ್ಲೋಸರ್‌ನಲ್ಲಿ ಸ್ವಾಧೀನ ಪಡಿಸಿಕೊಳ್ಳಲು ಉದ್ದೇಶಿಸಿರುವ ಪ್ರದೇಶವು ಮತ್ತೊಂದು ಎನ್‌ಕ್ಲೋಸರ್ ಆಗಬಾರದು.

(iv) ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಸ್ವಾಧೀನ ಪಡಿಸಿಕೊಳ್ಳಬೇಕಾದ ವಿವರಗಳನ್ನು ಮತ್ತು ಸಮರ್ಥನೆಯೊಂದಿಗೆ ಪ್ರಸ್ತಾವನೆಯನ್ನು ಏಕಮುಖ ಕಡತದ ಮುಖಾಂತರ ಸಂಬಂಧಪಟ್ಟ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸಲ್ಲಿಸಿ ಅವರ ಅನುಮೋದನೆಯನ್ನು ಪಡೆದು ಜಿಲ್ಲಾ ಸಮಿತಿಗೆ ಸಲ್ಲಿಸುವುದು.

(v) ಸ್ವಾಧೀನ ಪಡಿಸಿಕೊಳ್ಳಬೇಕಾದ ಪ್ರದೇಶಗಳನ್ನು 1:50,000 ಟೋಪೋ ಶೀಟ್‌ಗಳಲ್ಲಿ ಮತ್ತು ವಿಲೇಜ್ ಮ್ಯಾಪ್‌ಗಳಲ್ಲಿ ಗುರುತಿಸಿರಬೇಕು. ಸದರಿ ನಕ್ಷೆಯಲ್ಲಿ ಆ ಪ್ರದೇಶದಲ್ಲಿರುವ ಒಟ್ಟಾರೆ ಅರಣ್ಯ ಪ್ರದೇಶ, ಸದರಿ ಪ್ರದೇಶದಲ್ಲಿರುವ ಎಲ್ಲಾ ಎನ್‌ಕ್ಲೋಸರ್‌ಗಳು ಮತ್ತು ಸ್ವಾಧೀನ ಪಡಿಸಿಕೊಳ್ಳಲು ಉದ್ದೇಶಿಸಿರುವ ಪ್ರದೇಶಗಳನ್ನು ಸರಿಯಾಗಿ ವಿವಿಧ ಬಣ್ಣಗಳಿಂದ ಗುರುತಿಸುವುದು. ಇದರಲ್ಲಿ ಸಂಬಂಧಪಟ್ಟ ಜಿಲ್ಲಾ ಮಟ್ಟದ ಅಧಿಕಾರಿಗಳ ಸಹಿ ಇರಬೇಕು.

(vi) ಸ್ವಾಧೀನ ಪಡಿಸಿ ಕೊಳ್ಳಬೇಕಾದ ಪ್ರದೇಶದ ಜಂಟಿ ಸರ್ವೆ ಮಾಡಿ ಹದ್ದುಬಸ್ತುಗಳನ್ನು ಗುರುತಿಸಿರಬೇಕು. ಈ ನಕ್ಷೆಗಳಲ್ಲಿ ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಕಾರಿ, ಉಪ ನಿರ್ದೇಶಕರು, ಭೂ ಮಾಪನಾ ಇಲಾಖೆ ಇವರ ಮತ್ತು ಅವರ ಅಧೀನಾಧಿಕಾರಿಗಳ ಸಹಿ ಇರಬೇಕು.

(vii) ಸ್ವಾಧೀನ ಪಡಿಸಿಕೊಳ್ಳಲು ಉದ್ದೇಶಿಸಿರುವ ಪ್ರದೇಶವು ಯಾವುದೇ ರೀತಿಯ ಸರ್ಕಾರಿ ಅರಣ್ಯ ಪ್ರದೇಶವಲ್ಲವೆಂದು ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ದೃಢೀಕರಿಸುವುದು. ಅದೇ ರೀತಿ ಸದರಿ ಪ್ರದೇಶವು ಸರ್ಕಾರದ ಜಮೀನಲ್ಲವೆಂದು ಸಂಬಂಧಪಟ್ಟ ಜಿಲ್ಲಾಧಿಕಾರಿಗಳೂ ದೃಢೀಕರಿಸುವುದು.

(viii) ಸ್ವಾಧೀನ ಪಡಿಸಿಕೊಳ್ಳಲು ಉದ್ದೇಶಿಸಿರುವ ಪ್ರದೇಶದ ಮಾಲೀಕರು ಸದರಿ ಪ್ರದೇಶವನ್ನು ಅರಣ್ಯ ಇಲಾಖೆಯು ಸ್ವಾಧೀನ ಪಡಿಸಿಕೊಳ್ಳಲು ಇಚ್ಛಿಸಿರುವ ಬಗ್ಗೆ ಪತ್ರವನ್ನು ಪಡೆಯುವುದು.

(ix) ಜಿಲ್ಲಾ ಮಟ್ಟದ ಸಮಿತಿಗಳು ಪ್ರತೀ ತಿಂಗಳು ಮೊದಲನೇ ವಾರ ಸಭೆ ಸೇರತಕ್ಕದ್ದು, ಅರಣ್ಯ ಇಲಾಖೆಯು ಸ್ವಾಧೀನ ಪಡಿಸಿಕೊಳ್ಳಬೇಕಾದ ಪ್ರತಿ ಪ್ರಕರಣವನ್ನು ಪರಿಶೀಲಿಸಿ ಸಮಿತಿಯ ಮುಂದೆ ವರದಿಯನ್ನು ಮಂಡಿಸುವುದು. ಪ್ರತಿ ಕೇಸಿನ ಬಗ್ಗೆ ಕೂಲಂಕಷವಾಗಿ ಚರ್ಚಿಸಿ ಖಾಸಗಿ ಪ್ರದೇಶವನ್ನು ಸ್ವಾಧಿನ ಪಡಿಸಿಕೊಳ್ಳಲು ಅವಶ್ಯಕತೆ ಇದ್ದಲ್ಲಿ ಈ ಬಗ್ಗೆ ತೀರ್ಮಾನ ಕೈಗೊಳ್ಳುವುದು. ಈ ತೀರ್ಮಾನದ ಬಗ್ಗೆ ವರದಿ ಮತ್ತು ಪ್ರಸ್ತಾವನೆಯನ್ನು ಮುಂದಿನ ಕ್ರಮಕ್ಕಾಗಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಇವರಿಗೆ ಸಲ್ಲಿಸತಕ್ಕದ್ದು. ಈ ತೀರ್ಮಾನದ ಪ್ರತಿಯನ್ನು ಸಂಬಂಧಪಟ್ಟ ವೃತ್ತದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಕಳುಹಿಸುವುದು. ಒಂದು ವೇಳೆ ಈ ತೀರ್ಮಾನಗಳ ಬಗ್ಗೆ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಆಕ್ಷೇಪಣೆ, ಷರಾ, ಮಾರ್ಗದರ್ಶನ ಮತ್ತು ಪುನರ್ ಪರಿಶೀಲನೆ ಮಾಡುವ ವಿಷಯಗಳಿದ್ದಲ್ಲಿ ಅಂತಹ ವಿಷಯಗಳ ಬಗ್ಗೆ ಎರಡು ವಾರದೊಳಗಾಗಿ ಜಿಲ್ಲಾ ಸಮಿತಿಗೆ ಬರೆದು ಅದರ ಪ್ರತಿಯೊಂದನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಇವರಿಗೆ ಸಲ್ಲಿಸುವುದು. ಜಿಲ್ಲಾ ಸಮಿತಿಯು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಆಕ್ಷೇಪಿಸಿರುವ ಪ್ರಕರಣಗಳನ್ನು ಮರು ಪರಿಶೀಲಿಸಿ ಇತ್ಯರ್ಥ ಪಡಿಸುವುದು. ಇಂತಹ ಪರಿಶೀಲನಾ ಸಭೆಗೆ ಜಿಲ್ಲಾ ಸಮಿತಿಯು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಗಳನ್ನು ಸಹ ಆಹ್ವಾನಿಸಿ ಸದರಿ ವಿಷಯಗಳ ಬಗ್ಗೆ ತೀರ್ಮಾನ ಕೈಗೊಳ್ಳುವುದು.

(x) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಜಿಲ್ಲೆಯಿಂದ ಬಂದಿರುವ ಎಲ್ಲಾ ಪ್ರಕರಣಗಳ ಮೇಲೆ ತಮ್ಮ ಅಭಿಪ್ರಾಯ ನೀಡಿ ರಾಜ್ಯ ಮಟ್ಟದ ಸಭೆಗೆ ಪ್ರಸ್ತಾವನೆ ಸಲ್ಲಿಸತಕ್ಕದ್ದು. ಈ ಬಗ್ಗೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಯವರ ಮಟ್ಟದಲ್ಲಿ ಯಾವುದೇ ಸಮಿತಿಯ ಅವಶ್ಯಕತೆ ಇರುವುದಿಲ್ಲ.

(xi) ರಾಜ್ಯ ಮಟ್ಟದ ಸಮಿತಿಯ ಸಭೆಯನ್ನು ಕೊನೆ ಪಕ್ಷ ಪ್ರತಿ 45 ದಿನಗಳಗೊಮ್ಮೆ ಈ ಸಭೆಯನ್ನು ಆಯೋಜಿಸುವುದು. ಈ ಸಭೆಗೆ ಸಂಬಂಧಪಟ್ಟ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಜಿಲ್ಲಾಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿಗಳನ್ನು ಆಹ್ವಾನಿಸುವುದು.

(xii) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಇವರು ಪ್ರಸ್ತಾವನೆಗಳನ್ನು ಪರಿಶೀಲಿಸಿ ಶೀಘ್ರವಾಗಿ ರಾಜ್ಯ ಸಮಿತಿಗೆ ಮುಂದಿನ ತೀರ್ಮಾನಕ್ಕಾಗಿ ಸಲ್ಲಿಸುವುದು. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಇವರು ಇಂತಹ ಪ್ರದೇಶಗಳನ್ನು ಸ್ವಾಧೀನ ಪಡಿಸಿಕೊಳ್ಳಲು ಸೂಕ್ತ ಬಜೆಟ್ ಶೀರ್ಷಿಕೆಯಲ್ಲಿ ಅನುದಾನವನ್ನು ನಿಗಧಿ ಪಡಿಸುವುದು/ ಕಾಯ್ದಿರಿಸುವುದು. ಸರ್ಕಾರಕ್ಕೆ ಶಿಫಾರಸ್ಸು ಮಾಡುವಾಗ ಲಭ್ಯವಿರುವ ಅನುದಾನದ ಬಗ್ಗೆ ಪ್ರಸ್ತಾವನೆಯಲ್ಲಿ ನಮೂದಿಸುವುದು.

(xiii) ಪ್ರತಿಯೊಂದು ಪ್ರಸ್ತಾವನೆಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಈ ನಡವಳಿಯ ಜೊತೆ ಲಗತ್ತಿಸಿರುವ ನಮೂನೆಯಲ್ಲಿ ಟಿಪ್ಪಣಿಯನ್ನು ಸಹ ಸಲ್ಲಿಸುವುದು.

(xiv) ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಬಗ್ಗೆ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರು ಸುತ್ತೋಲೆ ಹೊರಡಿಸುವುದು. ಪ್ರತಿ ತಿಂಗಳು ಜಿಲ್ಲಾ ಸಮಿತಿಗಳನ್ನು ನಡೆಸಲು ಜಿಲ್ಲಾಧಿಕಾರಿಗಳಿಗೆ ಅರೆ ಸರ್ಕಾರಿ ಪತ್ರಗಳನ್ನು ಬರೆಯುವುದು.

(xv) ಕೊಡಗು ಜಿಲ್ಲೆ/ ಇತರೆ ಜಿಲ್ಲೆಗಳಲ್ಲಿನ ಪ್ರಸ್ತಾವನೆಗಳನ್ನು ಪರಿಗಣಿಸುವಾಗ ಜಮೀನು ಮತ್ತು ಸ್ವತ್ತುಗಳ ಮೇಲಿರುವ ಪೂರ್ಣ ಹಕ್ಕುಗಳು, ಭಾಗಶಃ ಹಕ್ಕುಗಳು ಇರುವ ಬಗ್ಗೆ ಜಿಲ್ಲಾ ಸಮಿತಿ ಮತ್ತು ಕಂದಾಯ ಇಲಾಖೆ ಸೂಕ್ತವಾಗಿ ತೀರ್ಮಾನಿಸುವುದು.

(xvi) ರಾಜ್ಯ ಸಮಿತಿಯ ತೀರ್ಮಾನದ ನಂತರ ಸ್ವಾಧೀನ ಪಡಿಸಿ ಕೊಳ್ಳಲು ನೋಟಿಫಿಕೇಶನ್‌ಗಳನ್ನು ಹೊರಡಿಸಲು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ತಕ್ಷಣ ಕ್ರಮ ಕೈಗೊಳ್ಳುವುದು. ಜಮೀನಿನ ಮಾಲೀಕರು ಜಮೀನು ನೀಡಲು ಮತ್ತು ಸದರಿ ಸ್ವತ್ತಿನ ಮೌಲ್ಯ ತೆಗೆದು ಕೊಳ್ಳಲು ಒಪ್ಪಿದ ಬಗ್ಗೆ ಪತ್ರ/ ಅಫಿಡವಿಟ್ ನೀಡಿದ್ದಲ್ಲಿ ಶೀಘ್ರವಾಗಿ ಈ ಕನ್ಸೆಂಟ್ ಅವಾರ್ಡ್‌ನ್ನು ಸಹ ತಡವಿಲ್ಲದೆ ಹೊರಡಿಸಲು ಕ್ರಮ ಕೈಗೊಳ್ಳುವುದು.

ವಿ.ಸೂ.: ಜಿಲ್ಲಾ ಕೇಂದ್ರದಲ್ಲಿ ಪ್ರಾದೇಶಿಕ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಇರದಿದ್ದಲ್ಲಿ ಆ ಜಿಲ್ಲೆಯ ವ್ಯಾಪ್ತಿಯಲ್ಲಿ ಪ್ರಾದೇಶಿಕ ಉಪ ಅರಣ್ಯ ಸಂರಕ್ಷಣಾಧಿಕಾರಿ ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಉದಾ: ಉಡುಪಿ ಜಿಲ್ಲೆಯಲ್ಲಿ ಕುಂದಾಪುರ ವಿಭಾಗದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಈ ಸಮಿತಿಗೆ ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ.

4. ಈ ಸಮಿತಿಯು ಸಂದರ್ಭಾನುಸಾರ ಇನ್ನಿತರೆ ಅಧಿಕಾರಿಗಳನ್ನು ಆಹ್ವಾನಿಸಲು ಅಧಿಕಾರ ಹೊಂದಿರುತ್ತದೆ.

(i) ಸಂಬಂಧಿಸಿದ ತಹಶೀಲ್ದಾರ್ ರವರು ಮೌಲ್ಯಮಾಪನದ ಬಗ್ಗೆ [illegible] ಜಮೀನು ಮಾರಾಟದ ದರಗಳ [illegible] ಇನ್ನಿತರೆ ಅಂಶಗಳ ಜೊತೆಗೆ ಜಮೀನಿನ [illegible]ವನ್ನು ಮಾಡಿ ವಿವರ ನೀಡುವುದು.

(ii) ಸದರಿ ಪ್ರದೇಶದಲ್ಲಿ ಕಟ್ಟಡಗಳು, ರಸ್ತೆ ಇನ್ನಿತರ ಸಿವಿಲ್ ಕೆಲಸಗಳಿದ್ದರೆ ಲೋಕೋಪಯೋಗಿ ಇಲಾಖೆಯು ಮೌಲ್ಯಮಾಪನ ಮಾಡುವುದು.

(iii) ತೋಟಗಾರಿಕಾ ಬೆಳೆಗಳು, ನೀರಾವರಿ ಸೌಲಭ್ಯಗಳನ್ನು ಇನ್ನಿತರೆ ತೋಟಗಾರಿಕೆಗೆ, ಸಂಬಂಧಪಟ್ಟ ಸ್ವತ್ತುಗಳನ್ನು ತೋಟಗಾರಿಕಾ ಇಲಾಖೆ ನಿರ್ಧರಿಸುವುದು.

(iv) ಮರಗಳ ಮೌಲ್ಯವನ್ನು ಅರಣ್ಯ ಇಲಾಖೆ ಮಾಡುವುದು. ಅರಣ್ಯ ಮರಗಳ / ಪ್ರದೇಶದ ಮೌಲ್ಯಮಾಪನ ಮಾಡುವಾಗ ನೆಟ್ ಪ್ರೆಸೆಂಟ್ ವ್ಯಾಲ್ಯೂವನ್ನು ಗಣನೆಗೆ ತೆಗೆದುಕೊಳ್ಳಬಹುದು. ಆದರೆ ಸ್ವಾಧೀನ ಪ್ರಕ್ರಿಯೆಯಲ್ಲಿ ಸೋಲೇಷಿಯಂ, ಬಡ್ಡಿ ಇನ್ನಿತರೆ ಅಂಶಗಳನ್ನು ಪರಿಗಣಿಸಬೇಕಾಗಿರುವುದರಿಂದ ಕೇವಲ ನೆಟ್ ಪ್ರೆಸೆಂಟ್ ವ್ಯಾಲ್ಯೂವನ್ನೇ ಅಳವಡಿಸಿಕೊಳ್ಳಲಾಗುವುದಿಲ್ಲ.

(v) ಸ್ವಾಧೀನ ಪಡಿಸಿಕೊಳ್ಳಬೇಕಾದ ಜಮೀನಿನ ಮಾಲೀಕರಿಗೆ ನೀಡುವ ಮೌಲ್ಯ ಹಾಗೂ ಪರಿಹಾರವನ್ನು ಈ ಸಮಿತಿಯು ನೆಗೋಷಿಯೇಷನ್ ಮಾಡುವುದು. ಈ ರೀತಿ ನೆಗೋಷಿಯೇಷನ್ ಮಾಡುವಾಗ ಇತ್ತೀಚಿನ ಹೊಸ ಭೂ ಸ್ವಾಧೀನ ಅಧಿನಿಯಮದಂತೆ ಸದರಿ ಜಮೀನಿನ ಮತ್ತು ಅದರಲ್ಲಿರುವ ಸ್ವತ್ತುಗಳ ಮೌಲ್ಯ, ಸೋಲೇಷಿಯಂ, ಬಡ್ಡಿ ದರ ಇನ್ನಿತರೆ ವಿಷಯಗಳನ್ನು ಸಹ ಗಮನದಲ್ಲಿಟ್ಟು ಕೊಳ್ಳುವುದು. ನೆಗೋಷಿಯೇಷನ್ ಮಾಡಿದ ಬಗ್ಗೆ ನಡವಳಿ ಮಾಡುವುದು ಮತ್ತು ಜಮೀನಿನ ಮಾಲೀಕರು ಒಪ್ಪಿಗೆ ನೀಡಿದ ಬಗ್ಗೆ ಸೂಕ್ತ ಪತ್ರ / ಅಫಿಡವಿಟ್ ಪಡೆಯುವುದು.

5. <u>ಪ್ರಸ್ತಾವನೆಗಳ ಜೊತೆ ಇರಬೇಕಾದ ದಾಖಲಾತಿಗಳು:</u>

(1) ಸ್ವಾಧೀನ ಪಡಿಸಿಕೊಳ್ಳಬೇಕಾದ ಪ್ರದೇಶದ ಮತ್ತು ಮಾಲೀಕರ ವಿವರಗಳು.
(2) ಮಾಲೀಕರು ಹೊಂದಿರುವ ಹಕ್ಕುಗಳ ಸ್ವರೂಪದ ಬಗ್ಗೆ ಕಂದಾಯ ಇಲಾಖೆಯ ಅಭಿಪ್ರಾಯ.
(3) ಸ್ವಾಧೀನ ಪಡಿಸಿಕೊಳ್ಳುವ ಪ್ರದೇಶಕ್ಕೆ ಈಗಾಗಲೇ ಇರುವ ಹಕ್ಕುಗಳು ಮತ್ತು ಋಣಗಳು, ಈಸ್‌ಮೆಂಟ್ ರೈಟ್ಸ್, ಇತ್ಯಾದಿ.
(4) ಪಹಣಿ, ಖಾತಾ, ಎಕ್ಸ್‌ಟ್ರಾಕ್ಟ್, ಎನ್‌ಕಂಬರೆನ್ಸ್ ಸರ್ಟಿಫಿಕೇಟ್, ಹಿಸ್ಟರಿ ಆಫ್ ಮ್ಯುಟೇಷನ್, ರೆವಿನ್ಯೂ ಸೆಟ್ಲಮೆಂಟ್ ರೆಕಾರ್ಡ್ಸ್ ಹಾಗೂ ಇನ್ನಿತರೆ ಕಂದಾಯ ದಾಖಲಾತಿಗಳು.
(5) ವಿಲೇಜ್ ಮ್ಯಾಪ್, ಸರ್ವೆ ಆಫ್ ಇಂಡಿಯಾದ 1:50,000 ನಕ್ಷೆಯಲ್ಲಿ ಗುರುತಿಸುವುದು ಮತ್ತು ವರದಿ.
(6) ಕಂದಾಯ ಮತ್ತು ಅರಣ್ಯ ಇಲಾಖೆ ಜಂಟಿ ಸರ್ವೆ ನಕ್ಷೆ ಮತ್ತು ವರದಿ
(7) ಸದರಿ ಪ್ರದೇಶದ ಉಪಗ್ರಹ ಚಿತ್ರಗಳು, ಛಾಯಾಚಿತ್ರಗಳು.
(8) ಸುತ್ತಲೂ/ಪಕ್ಕ ಇರುವ ಅರಣ್ಯ ಪ್ರದೇಶದ ನೋಟಿಫಿಕೇಷನ್
(9) ಸ್ವಾಧೀನ ಪಡಿಸಿಕೊಳ್ಳಬೇಕಾದ ಜಮೀನಿನ ಮೌಲ್ಯಮಾಪನ / ಪರಿಹಾರದ ವರದಿ. ಇದರ ಜೊತೆ ಕಟ್ಟಡಗಳು, ತೋಟಗಾರಿಕೆ ಬೆಳೆಗಳು, ಮರ ಮೌಲ್ಯ, ನೀರಾವರಿ ಹಾಗೂ ಇನ್ನಿತರೆ ಸ್ವತ್ತುಗಳ ಮೌಲ್ಯಮಾಪನ.
(10) ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಉಪ ಅರಣ್ಯ ಸಂರಕ್ಷಣಾಧಿಕಾರಿ ರವರ ವರದಿ.
(11) ಕಂದಾಯ ಇಲಾಖೆಯ ತಹಶಿಲ್ದಾರ್ ರವರ ಸ್ಥಳ ಮಹಜರ್ ವರದಿ, ಉಪ ವಿಭಾಗಾಧಿಕಾರಿಗಳ ಮತ್ತು ಜಿಲ್ಲಾಧಿಕಾರಿಗಳ ವರದಿ ಮತ್ತು ಶಿಫಾರಸ್ಸುಗಳು.
(12) ಜಿಲ್ಲಾ ಮಟ್ಟದ ಸಭೆಯ ನಡಾವಳಿಗಳು/ತೀರ್ಮಾನಗಳು.
(13) ಮಾಲೀಕರ ಒಪ್ಪಿಗೆ ಪತ್ರ ಮತ್ತು ನಿರ್ಧರಿಸಿದ ಮೌಲ್ಯವನ್ನು ಒಪ್ಪಿಕೊಂಡು ಜಮೀನು ನೀಡಲು ಕೊಟ್ಟ ಅಫಿಡವಿಟ್.
(14) ಸ್ವಾಧೀನ ಪಡಿಸಿಕೊಳ್ಳಲು ಅವಶ್ಯವಿರುವ ಇನ್ನಿತರೆ ವರದಿ ಮತ್ತು ದಾಖಲಾತಿಗಳು

(15) ಅಡಕಗೊಳಿಸಿರುವ ಟಿಪ್ಪಣಿ / ಚೆಕ್ ಲಿಸ್ಟ್ ಪ್ರಕಾರ ಪ್ರಸ್ತಾವನೆಯನ್ನು ಸಲ್ಲಿಸುವುದು
(16) ಇನ್ನಿತರೆ ಮಾಹಿತಿ, ವರದಿಗಳು, ಪತ್ರಗಳು ಮತ್ತು ಅಡಕಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ಎಸ್.ಪಿ.ಪಾಟೀಲ)
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಗೆ:-

ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ವಿಕಾಸಸೌಧ, ಬೆಂಗಳೂರು ಇವರಿಗೆ ಕಳುಹಿಸುತ್ತಾ, ಸದರಿ ಆದೇಶವನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಿ 100 ಪ್ರತಿಗಳನ್ನು ಅಧೀನ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ, ಬಹುಮಹಡಿಗಳ ಕಟ್ಟಡ, 4ನೇ ಮಹಡಿ, 2ನೇ ಗೇಟ್, ಬೆಂಗಳೂರು ಇಲ್ಲಿಗೆ ಕಳುಹಿಸಿಕೊಡುವಂತೆ ಕೋರಿದೆ.

ಪ್ರತಿಗಳು:-

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.
3. ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ), ವಿಧಾನಸೌಧ, ಬೆಂಗಳೂರು.
4. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯಪಡೆ ಮುಖ್ಯಸ್ಥರು), ಅರಣ್ಯಭವನ, ಮಲ್ಲೇಶ್ವರಂ, ಬೆಂಗಳೂರು – 03.
5. ಪ್ರಾದೇಶಿಕ ಆಯುಕ್ತರು, ಬೆಂಗಳೂರು / ಮೈಸೂರು / ಬೆಳಗಾವಿ / ಗುಲ್ಬರ್ಗಾ ವಿಭಾಗಗಳು.
6. ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಸಂಪನ್ಮೂಲ ನಿರ್ವಹಣೆ), ಅರಣ್ಯಭವನ, ಮಲ್ಲೇಶ್ವರಂ, ಬೆಂಗಳೂರು – 03.
7. ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (EWPT), ಅರಣ್ಯಭವನ, ಮಲ್ಲೇಶ್ವರಂ, ಬೆಂಗಳೂರು – 03.
8. ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಭೂದಾಖಲೆ), ಅರಣ್ಯಭವನ, ಮಲ್ಲೇಶ್ವರಂ, ಬೆಂಗಳೂರು – 03.
9. ಎಲ್ಲಾ ಜಿಲ್ಲಾಧಿಕಾರಿಗಳು.
10. ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿ (ಪ್ರಾದೇಶಿಕ / ವನ್ಯಜೀವಿ).
11. ಎಲ್ಲಾ ಜಿಲ್ಲೆಗಳ ಉಪ ನಿರ್ದೇಶಕರು (ಭೂ ದಾಖಲೆಗಳು).
12. ಎಲ್ಲಾ ಜಿಲ್ಲೆಗಳ ಜಿಲ್ಲಾನೋಂದಣಾಧಿಕಾರಿಗಳು
13. ಶಾಖಾ ರಕ್ಷ ಕಡತ / ಹೆಚ್ಚುವರಿ ಪ್ರತಿ.

ನಮೂನೆ ಪ್ರಶ್ನೆ ಸಂಖ್ಯೆ : ೮೬೩ (೯೬೮) - ಇ

| ಹೆಸರು ಮತ್ತು ವಿಳಾಸ | ಸರ್ವೆ ಸಂ ಜಾಗದ ನಿಬಂಧನೆ | ಷರಾ |
|---|---|---|
| ಮಡಿಕೇರಿ ಪ್ರಾದೇಶಿಕ ವಿಭಾಗ | | |
| ಶ್ರೀಮತಿ ಕೆ.ಎಂ.ಗೌರಮ್ಮ & ಇತರರು ಕುಂದಚೇರಿ ಗ್ರಾಮ | ರಿಡೀಂ ಸಾಗು ಜಾಗ ಸರ್ವೆ ನಂಬರ್ 1/5, 1/7, 1/9 ಒಟ್ಟು 13.35 ಎಕರೆ | ಕಡತವನ್ನು ಜಂಟಿ ಸರ್ವೆ ವರದಿಗಾಗಿ ಕಂದಾಯ ಇಲಾಖೆಗೆ ರವಾನಿಸಲಾಗಿದೆ. ವರದಿ ಸ್ವೀಕೃತಿಗೊಂಡಿರುವುದಿಲ್ಲ. |
| ಶ್ರೀ ಪಿ.ಎಂ.ಸುಬ್ಬಯ್ಯ ಸಣ್ಣಪುಲಿಕೋಟು ಗ್ರಾಮ | ಸಾಗು ಜಾಗ ಸರ್ವೆ ನಂಬರ್ 115 ಮತ್ತು 12.74 ಎಕರೆ | |
| ಶ್ರೀ ವಲೇರಿಯನ್ ಪಿಂಟೋ ಕಾವೂರು ಗ್ರಾಮ | 1/3 | |
| ಶ್ರೀಮತಿ ನಾಗರತ್ನ ಕುಂದಚೇರಿ ಗ್ರಾಮ | ಸಾಗು ಜಾಗ ಸರ್ವೆ ನಂಬರ್ 1/10 | |
| ಶಿಲ್ಪಿ ಎಸ್ಟೇಟ್, ಮಡಿಕೇರಿ | — | ಈ ಜಾಗವನ್ನು ಆನೆ ಮಾನವ ಸಂಘರ್ಷದ ಪ್ರದೇಶವನ್ನು ಗುರುತಿಸಿ ಆಂಸ್ಕಿ ಮಾಡಲಾಗಿದೆ. ಜಾಗದ ಮಾಲೀಕರಿಂದ ದಾಖಲಾತಿಗಳನ್ನು ಪಡೆಯಲು ಅಧೀನ ಅಧಿಕಾರಿಗಳಿಗೆ ತಿಳಿಸಿದೆ. |
| ಶ್ರೀ ಕೆ.ಜಿ.ಗೋಪಾಲ ಕಾಲೂರು ಗ್ರಾಮ | ಸಾಗು ಬಾಣೆ ಸರ್ವೆ ನಂಬರ್ 2/3 ರ 9.60 ಎಕರೆ | ಸರ್ವೆ ಕಾರ್ಯ ಮುಗಿದಿದ್ದು, ಜಿಲ್ಲಾ ಮಟ್ಟದ ಸಮಿತಿಗೆ ವರದಿ ಸಲ್ಲಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ವೀರಾಜಪೇಟೆ ಪ್ರಾದೇಶಿಕ ವಿಭಾಗ | | |
| ಶ್ರೀ ಎಂ.ಸಿ.ಚಾಂಡಿ, ಎಂ.ಸಿ.ಜಾರ್ಜ್ ಮೇರಿ ರಾಂಕ್, ಸಾಜಿ ಪಿಲಿಫ್ ಮತ್ತು ಚೆರಿಯನ್ನ ಪಿಲಿಪ್ | 101/1 | ಸದರಿ ಜಾಗದ ಸ್ಥಳ ಪರಿಶೀಲಿಸಿ ಜಂಟಿ ಮೋಜಣಿ ಮಾಡಿಕೊಡಲು ಉಪ ಅರಣ್ಯ ಸಂರಕ್ಷಣಾಧಿಕಾರಿ, ವೀರಾಜಪೇಟೆ ಕಛೇರಿಯಿಂದ ಭೂ ದಾಖಲೆಗಳ ಸಹಾಯಕ ನಿರ್ದೇಶಕರು, ವೀರಾಜಪೇಟೆರವರಿಗೆ ಪತ್ರ ಬರೆಯಲಾಗಿರುತ್ತದೆ. |
| ಶ್ರೀಮತಿ ಸ್ವಪ್ನ ಚಿಟ್ಟಿಯಪ್ಪ ಶ್ರೀ ಎ.ಎಂ. ಚಿಟ್ಟಿಯಪ್ಪ | 106/4 | ಸದರಿ ಜಾಗದ ಕಂದಾಯ ಅಭಿಪ್ರಾಯದ ಕುರಿತು ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ ಇವರಿಗೆ ಪತ್ರ ಬರೆಯಲಾಗಿರುತ್ತದೆ. |
| ಮಡಿಕೇರಿ ವನ್ಯಜೀವಿ ವಿಭಾಗ | | |
| ಶ್ರೀ ಕಾಳಿಮಾಡ ಟಿ.ಅಣ್ಣಯ್ಯ ಪರಕಟಗೇರಿ | 14/10 | ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಪ್ರಸ್ತಾವಿತ ವರದಿಗಾಗಿ ಕಡತವನ್ನು ವಲಯ ಅರಣ್ಯಾಧಿಕಾರಿಯವರಿಗೆ ಕಳುಹಿಸಲಾಗಿರುತ್ತದೆ. |
| ಶ್ರೀ ವಿ.ಯು.ಪತ್ರೋಸ್ ಮತ್ತು ಫಾದ್ರಿ ಕೆ.ಆರ್. ವಿ.ಜೆಕಬ್ | 8 | |

ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ
ಕೊಡಗು ವೃತ್ತ, ಮಡಿಕೇರಿ

Addl. Principal Chief Conservator of Forests
(Land Records)
Aranya Bhavan, Malleshwaram
18th Cross, Bengaluru-03